


# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ಗುರುತಿನ ಪ್ರಶ್ನೆ**

ದಿನಾಂಕ : 04-03-2021 ಪ್ರಶ್ನೆ ಸಂಖ್ಯೆ : 105 (701)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀಮತಿ ಎಸ್. ವೀಣಾ ಅಚ್ಚಯ್ಯ(ವಿಧಾನಸಭೆಯಿಂದ ಚುನಾಯಿತರಾದವರು)

ಉತ್ತರ ನೀಡಬೇಕಾದ ದಿನಾಂಕ : 04-03-2021

ಉತ್ತರಿಸುವ ಸಚಿವರು: ಮುಖ್ಯಮಂತ್ರಿಗಳು

ವಿಷಯ : ಕೊಡಗು ಜಿಲ್ಲೆಯಲ್ಲಿನ ಕಾಫಿ ಬೆಳೆಗಾರರು ಉಪಯೋಗಿಸುವ ಪಂಪ್‌ಸೆಟ್‌ಗಳಿಗೆ ಅವು ಬಳಕೆಯಾದ ಅವಧಿಗೆ ಮಾತ್ರ ಶುಲ್ಕ ವಿಧಿಸುವ ಬಗ್ಗೆ

(ಅ) ಕೊಡಗು ಜಿಲ್ಲೆಯಲ್ಲಿನ ಕಾಫಿ ಬೆಳೆಗಾರರು ತಮ್ಮ ಕಾಫಿ ಬೆಳೆಗೆ ಸ್ಪ್ರಿಂಕ್ಲರ್ ಮಾಡಲು ವರ್ಷದಲ್ಲಿ 3 ತಿಂಗಳು ಮಾತ್ರ ಉಪಯೋಗಿಸುವ ಪಂಪ್‌ಸೆಟ್‌ಗಳಿಗೆ, ಇಡೀ ವರ್ಷಕ್ಕೆ ಅನ್ವಯಿಸುವಂತೆ ಕನಿಷ್ಟ ದರ ನಿಗದಿ ಮಾಡಿ ಹಣ ವಸೂಲಿ ಮಾಡುತ್ತಿರುವುದರಿಂದ ಈಗಾಗಲೇ ನಷ್ಟದಲ್ಲಿರುವ ಕಾಫಿ ಬೆಳೆಗಾರರು ಮತ್ತಷ್ಟು ಆರ್ಥಿಕ ಸಂಕಷ್ಟಕ್ಕೆ ಸಿಲುಕಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ಬಂದಿದ್ದಲ್ಲಿ, ಸದರಿ ಪಂಪ್ ಸೆಟ್‌ಗಳಿಗೆ ಅವು ವರ್ಷದಲ್ಲಿ ಬಳಕೆಯಾಗುವ 3 ತಿಂಗಳುಗಳಿಗೆ ಮಾತ್ರ ಅನ್ವಯಿಸುವಂತೆ ಕನಿಷ್ಟ ದರ ನಿಗದಿ ಮಾಡಿ ವಸೂಲಿ ಮಾಡಲು ಸರ್ಕಾರ ಈ ಕೂಡಲೇ ಕ್ರಮವಹಿಸುವುದೇ;

(ಇ) ಕಳೆದ ಹಲವಾರು ವರ್ಷಗಳಲ್ಲಿ ಸಂಭವಿಸಿದ ಪ್ರಕೃತಿ ವಿಕೋಪದಿಂದ ಕಾಫಿ ಬೆಳೆ ಹಾಳಾಗಿರುವುದು ಮತ್ತು ಸತತ ಬೆಲೆ ಕುಸಿತದಿಂದಾಗಿ ಕೊಡಗಿನ ಕಾಫಿ ಬೆಳೆಗಾರರು ತೀವ್ರ ಆರ್ಥಿಕ ಸಂಕಷ್ಟಕ್ಕೆ ಸಿಲುಕಿರುವುದನ್ನು ಪರಿಗಣಿಸಿ, ಕೊಡಗು ಜಿಲ್ಲೆಯಲ್ಲಿನ ಕಾಫಿ ಬೆಳೆಗಾರರು ಬಳಸುವ 10 ಅಶ್ವಶಕ್ತಿವರೆಗಿನ ಪಂಪ್ ಸೆಟ್‌ಗಳಿಗೆ ಉಚಿತ ವಿದ್ಯುತ್ ಪೂರೈಕೆ ಮಾಡಲು ಸರ್ಕಾರ ಈ ಕೂಡಲೇ ಕ್ರಮವಹಿಸುವುದೇ?